ಗವರ್ನರ್ ಕೆಂಪು

# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಆರ್. ಧರ್ಮಸೇನ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 194

ಉತ್ತರಿಸಬೇಕಾದ ದಿನಾಂಕ : 02.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಎರಡು ವರ್ಷಗಳಲ್ಲಿ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸಹಕಾರ ಕ್ಷೇತ್ರದಲ್ಲಿ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಲ್ಲಿ ಸಾಲ ನೀಡಲಾಗಿರುವ ರೈತರ ಸಂಖ್ಯೆ ಎಷ್ಟು? | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ವಿತರಿಸುವ ಯೋಜನೆ ಮತ್ತು ಶೇ.3 ರ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆಯಲ್ಲಿ ಸಹಕಾರ ಸಂಘಗಳ ಮೂಲಕ ಕಳೆದ ಎರಡು ವರ್ಷಗಳಲ್ಲಿ ರೈತರಿಗೆ ವಿತರಿಸಿದ ಸಾಲದ ವಿವರವನ್ನು ಅನುಬಂಧ-01 ರಲ್ಲಿ ನೀಡಲಾಗಿದೆ. |
| (ಆ) | ಈ ಯೋಜನೆಯಡಿ ನೀಡುವ ಸಾಲದ ಗರಿಷ್ಠ ಮತ್ತು ಕನಿಷ್ಠ ಮೊತ್ತ ಎಷ್ಟು; | ಶೂನ್ಯ ಬಡ್ಡಿದರದಲ್ಲಿ ಅಲ್ಪಾವಧಿ ಬೆಳೆ ಸಾಲ ವಿತರಿಸುವ ಯೋಜನೆಯಡಿ ಕುಟುಂಬಕ್ಕೆ ಗರಿಷ್ಟ ರೂ.3.00 ಲಕ್ಷಗಳವರೆಗಿನ ಸಾಲದ ಮಿತಿಯನ್ನು ನಿಗದಿಪಡಿಸಲಾಗಿದೆ. ಕನಿಷ್ಟ ಸಾಲದ ಮಿತಿ ನಿಗದಿಯಾಗಿರುವುದಿಲ್ಲ.<br>ಶೇ.3 ರ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆಯಡಿ ಕುಟುಂಬಕ್ಕೆ ಗರಿಷ್ಟ ರೂ.10.00 ಲಕ್ಷಗಳವರೆಗಿನ ಸಾಲದ ಮಿತಿಯನ್ನು ನಿಗದಿಪಡಿಸಲಾಗಿದೆ. ಕನಿಷ್ಟ ಸಾಲದ ಮಿತಿ ನಿಗದಿಯಾಗಿರುವುದಿಲ್ಲ. |
| (ಇ) | ಮೇಲ್ಕಂಡ ಎರಡು ಜಿಲ್ಲೆಗಳಲ್ಲಿ ಎಷ್ಟು ರೈತರಿಗೆ ಸಾಲ ಮನ್ನಾ ಮಾಡಲಾಗಿದೆ; ಸಾಲ ಮನ್ನಾ ಮಾಡಲು ಸರ್ಕಾರ ವಿಧಿಸಿರುವ ಮಾನದಂಡಗಳೇನು? | ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಲ್ಲಿ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಸಹಕಾರ ಸಂಘಗಳಲ್ಲಿ ಕ್ರಮವಾಗಿ 49,430 ಮತ್ತು 16,421 ರೈತರಿಗೆ ಸಾಲ ಮನ್ನಾ ಮಾಡಲಾಗಿದೆ.<br>ಸಾಲ ಮನ್ನಾ ಮಾಡಲು ಸರ್ಕಾರವು ವಿಧಿಸಿರುವ ಮಾನದಂಡಗಳು ಈ ಕೆಳಗಿನಂತಿರುತ್ತವೆ.<br>1. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು; ಡಿಸಿಸಿ ಬ್ಯಾಂಕುಗಳು, ಪಿಕಾರ್ಡ್ ಬ್ಯಾಂಕುಗಳು ಹಾಗೂ ಲ್ಯಾಂಪ್ಸ್‌ಗಳಲ್ಲಿ ರೈತರು ದಿ:10.07.2018ಕ್ಕೆ ಹೊರಬಾಕಿ ಹೊಂದಿರಬೇಕು.<br>2. ಬೆಳೆ ಸಾಲದಲ್ಲಿ ಒಂದು ಕುಟುಂಬಕ್ಕೆ ಗರಿಷ್ಟ ರೂ.1.00 ಲಕ್ಷ ಮಾತ್ರ ಮನ್ನಾ ಆಗುತ್ತದೆ.<br>3. ಈ ಯೋಜನೆ ಕೆಳಕಂಡವರಿಗೆ ಅನ್ವಯವಾಗುವುದಿಲ್ಲ. |
| | | • ರೂ.20,000 ಕ್ಕಿಂತ ಹೆಚ್ಚಿನ ವೇತನ/ಪಿಂಚಣಿ ಪಡೆಯುವ ಸರ್ಕಾರಿ, ಸಹಕಾರ ಮತ್ತು ಇತರೇ ಕ್ಷೇತ್ರದ ನೌಕರರು.<br>• ಕಳೆದ ಮೂರು ವರ್ಷಗಳಲ್ಲಿ ಯಾವುದಾದರೂ ಒಂದು ವರ್ಷದಲ್ಲಿ ಆದಾಯ ತೆರಿಗೆ ಪಾವತಿಸಿರುವವರಿಗೆ. |

| | | |
|---|---|---|
| | | 4. ದಿ:10.07.2018 ಕ್ಕೆ ಹೊರಬಾಕಿ ಚಾಲ್ತಿ ಇದ್ದಲ್ಲಿ ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲನ್ನು ಗಡುವಿನ ದಿನಾಂಕದೊಳಗೆ ಮರುಪಾವತಿಸತಕ್ಕದ್ದು.<br>5. ಬೆಳೆ ಸಾಲದ ಹೊರಬಾಕಿ ಸುಸ್ತಿ ಇದ್ದಲ್ಲಿ, ಮರುಪಾವತಿ ದಿನಾಂಕದವರೆಗಿನ ಸಂಪೂರ್ಣ ಬಡ್ಡಿಯನ್ನು ಹಾಗೂ ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲನ್ನು ದಿನಾಂಕ: 31.07.2019 ರೊಳಗೆ ಪಾವತಿಸತಕ್ಕದ್ದು.<br>6. ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ದೊರೆಯುವುದು. |

**ಸಂಖ್ಯೆ: ಸಿಒ 18 ಸಿಎಲ್ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು

## ಅನುಬಂಧ-1

(ರೂ. ಲಕ್ಷಗಳಲ್ಲಿ)

| ಸಹಕಾರ ಸಂಘಗಳು | ಸಾಲದ ವಿಧ | ಮೈಸೂರು ಜಿಲ್ಲೆ ರೈತರ ವಿವರ | | | | ಚಾಮರಾಜನಗರ ಜಿಲ್ಲೆ ರೈತರ ವಿವರ | | | |
|---|---|---|---|---|---|---|---|---|---|
| | | 2018-19 | | 2019-20 | | 2018-19 | | 2019-20 | |
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಡಿ.ಸಿ.ಸಿ.ಬಿ ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ | ಅಲ್ಪಾವಧಿ ಕೃಷಿ ಸಾಲ | 43343 | 38970.26 | 34744 | 30862.35 | 14963 | 11268.40 | 11085 | 8501.55 |
| | ಮಧ್ಯಮಾವಧಿ ಕೃಷಿ ಸಾಲ | 859 | 1459.50 | 1306 | 4409.00 | 18 | 66.02 | 140 | 522.01 |
| ಪಿಕಾರ್ಡ್ ಬ್ಯಾಂಕುಗಳ ಮೂಲಕ | ಮಧ್ಯಮಾವಧಿ /ದೀರ್ಘಾವಧಿ ಕೃಷಿ ಸಾಲ | 722 | 1046.21 | 717 | 1078.41 | 108 | 137.89 | 239 | 282.95 |
| | ಒಟ್ಟು | **44924** | **41475.97** | **36767** | **36349.76** | **15089** | **11472.31** | **11464** | **9306.51** |

ಸಹಕಾರ ಸಂಘಗಳ ಅಪರ ನಿಬಂಧಕರು
(ಪತ್ತು)